KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಅಕ್ಟೋಬರ್ ೨, ೨೦೦೮ (ಆಶ್ವಯುಜ ೧೦, ಶಕ ವರ್ಷ ೧೯೩೦) | ಸಂಚಿಕೆ ೪೦ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಂದಾಯ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಕಂಇ 7 ಎಲ್ಆರ್ಎಂ 2007, ಬೆಂಗಳೂರು, ದಿನಾಂಕ:18ನೇ ಜುಲೈ, 2008**

ದಕ್ಷಿಣ ಭಾರತ ಹಿಂದಿ ಪ್ರಚಾರಸಭಾ, ಧಾರವಾಡ, ಇವರಿಗೆ ಧಾರವಾಡ ಜಿಲ್ಲೆಯ ಧಾರವಾಡ ತಾಲ್ಲೂಕು, ಮುಮ್ಮಿಗಟ್ಟಿ ಗ್ರಾಮದ ರಿ.ಸ.ನಂ.178/1 ಮತ್ತು 178/3ಗಳಲ್ಲಿ ಒಟ್ಟು 4 ಎಕರೆ 15 ಗುಂಟೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ನಮೂನೆ 15–ಎ ಮತ್ತು ನಮೂನೆ–15 ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಇವರು ಪತ್ರಸಂಖ್ಯೆ: ಕೆ.ಎಲ್.ಆರ್.ವಿ/ ಸಿಆರ್/04/06–07 ದಿನಾಂಕ:12.02.2007ರ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂಬರ್ ರಿ.ಸ.ನಂ.178/1 ಮತ್ತು 178/3 ಗಳಲ್ಲಿ ಒಟ್ಟು 4 ಎಕರೆ 15 ಗುಂಟೆ ಕೃಷಿ ಜಮೀನನ್ನು ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109(1ಎ) ರಡಿ ಅನುಮೋದನೆ/ ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79–ಬಿ ಮತ್ತು 80 ಕ್ಕೆ ವಿನಾಯಿತಿ ನೀಡಿ ದಕ್ಷಿಣ ಭಾರತ ಹಿಂದಿ ಪ್ರಚಾರಸಭಾ, ಧಾರವಾಡ, ಇವರಿಗೆ ಧಾರವಾಡ ಜಿಲ್ಲೆಯ ಧಾರವಾಡ ತಾಲ್ಲೂಕು, ಮುಮ್ಮಿಗಟ್ಟಿ ಗ್ರಾಮದ ರಿ.ಸ.ನಂ.178/1 ಮತ್ತು 178/3ಗಳಲ್ಲಿ ಒಟ್ಟು 4 ಎಕರೆ 15 ಗುಂಟೆ ಕೃಷಿ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕೃಷಿ ಭೂಮಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1ಎ) ಅಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳಿಗೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 51 ಪೇಯ್ಡ್ ಆಫ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ ಅಭಿವೃದ್ಧಿ ಪ್ರಾಧಿಕಾರ/ ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ನಾರಾಯಣ ಗೌಡ**

ಪಿ.ಆರ್.860

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸುಧಾರಣೆ)

## DEPARTMENT OF COMMERCIAL TAXES

**Office of the Commissioner of Commercial Taxes in Karnataka, Gandhinagar, Bangalore**

**NOTIFICATION**

**No.KSA.CR.155/ 2007-08, Bangalore, Dated:23rd June, 2008**

In exercise of the powers under clause (b) of sub-rule (3) of Rule 33 of the Karnataka Value Added Tax Rules, 2005, it is hereby notified that, commencing from the tax period of the month of June, 2008;

(1) every dealer registered under the Karnataka Value Added Tax Act 2003 and who with his total turnover relating to sale of goods in the course of export outside the territory of India for the year ending 31st march, 2008 or in any subsequent year as declared in the monthly returns filed for that year is ten lakh rupees or more and also is claiming refund or deduction of input tax of one lakh rupees or more under sub section (1) of Section 20 of the said Act on such sales; and

(2) every registered dealer who is claiming deduction of input tax under section 11 of the Act for the year ending 31st March, 2008 or in any subsequent year as declared in the monthly returns filed for that year is twenty lakhs rupees or more and whose ratio of output tax to input tax is less than 1.25, shall enter in the website:http://vat.kar.nic.in/, the details of-

i) his purchases of goods made within the State from other registered dealers in respect of which he is eligible to claim refund or deduction of input tax,

ii) his sales of goods in the course of export outside the territory of India,

iii) his sales of goods made to other registered dealers in the State, on or before the 20th day of the succeeding month, in the following manner:

1) The dealer shall operate his account in the website using the user name and password communicated to him by the Commissioner and in case such user name and password is not communicated by 20th July, 2008, he shall obtain the same from the Commissioner.

2) He shall follow the procedure and instructions as specified in the website to enter the details specified in clauses (i), (ii) and (iii) above.

Explanation: Ratio of output tax to input tax means the aggregate of output tax payable under the provisions of the Karnataka Value Added Tax Act, 2003 as declared by the dealer in the monthly returns filed for the year ending 31st March, 2008 divided by the aggregate of the input tax deduction claimed during the year.

**B.A. HARISH GOWDA**

PR-861

Commissioner of Commercial Taxes
in Karnataka, Bangalore.

**OFFICE OF THE ASST. COMMISSIONER OF COMMERCIAL TAXES, LOCAL VAT OFFICE-015, BANGALORE**

**(Notified Authority under Rule 6(i) of the CST (Karnataka) Rules 1957)**

**NOTIFICATION**

**No.29630352309/ 2008-09, Dated:5th July, 2008**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-F described below are declared to be obsolete and invalid.

| Sl. No. | Name of the declaration form declared obsolete and invalid No. | Name & Address of the dealer to whom forms were issued by the Department | To whom the forms were issued by the dealer | Date from which declared obsolete & Reasons | Name of the Circle issuing the Form | Reasons |
|---|---|---|---|---|---|---|
| 1. | Form-F bearing No.03H 531958 to 03H 531961 total 4 Blank leaves in original duplicate and triplicate. | M/s Percept-Engineers Pvt.Ltd. No.38/2, First Floor, Near Prestige Tech Park, Marathahalli Outer Ring Road, Panathur Post, Kadabisnahalli, Bangalore-560087 | Stated to have been issued to Percept, Engineers Pvt. Ltd. 2nd Floor, Palakkal Building Vivekananda Line, NH Bye Pass, Vennala P.O.Kochi-28, Kerala State. | 30.06.2008 | L.V.O.035 Bangalore. | Lost & intimated accordingly |

**M.B. HARISHABABU**

PR-842

Asst. Commissioner of Commercial Taxes,
LVO-015, VTK-2, Koramangala, Bangalore-47.

**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ**
**ಅಧಿಕೃತ ಜ್ಞಾಪನ**
**ಸಂಖ್ಯೆ: ಸಿಐ:52:ಎಂಜಿಎಸ್.2008, ಬೆಂಗಳೂರು, ದಿನಾಂಕ:15ನೇ ಜುಲೈ, 2008**

**ವಿಷಯ:** ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಹಿರಿಯ ಭೂಭೌತ ವಿಜ್ಞಾನಿ (ಹಿಂದಿನ ಭೂಭೌತ ವಿಜ್ಞಾನಿ) ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಗೊಳಿಸುವ ಬಗ್ಗೆ.

ದಿನಾಂಕ:01.01.2008ಕ್ಕೆ ಅನ್ವಯಿಸುವಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಹಿರಿಯ ಭೂಭೌತ ವಿಜ್ಞಾನಿ ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಗೊಳಿಸಲಾಗಿದೆ. ಆದರೆ, ಉದ್ದೇಶಿಸಿರುವ ಜ್ಯೇಷ್ಠತೆ ಮತ್ತು ಅದಕ್ಕೆ ಸಂಬಂಧಿಸಿದಂತೆ, ಇತರೆ ಸೇವಾ ವಿಷಯಗಳ ಬಗ್ಗೆ ಆಕ್ಷೇಪಣೆಗಳಿದ್ದಲ್ಲಿ, ಬಾಧಿತರಾದ ಅಧಿಕಾರಿಗಳು ಆಕ್ಷೇಪಣೆಗಳನ್ನು, ಕರ್ನಾಟಕ ರಾಜ್ಯಪತ್ರದಲ್ಲಿ ಈ ಅಧಿಕೃತ ಜ್ಞಾಪನಾ ಪ್ರಕಟಿಸಲಾದ ಮೂವತ್ತು ದಿನಗಳೊಳಗಾಗಿ ಲಿಖಿತ ಮೂಲಕ ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು–560 001 ಇವರಿಗೆ ಸಲ್ಲಿಸತಕ್ಕದ್ದು. ನಂತರ ಸ್ವೀಕರಿಸಿದ ಆಕ್ಷೇಪಣೆಗಳನ್ನು ಪರಿಗಣಿಸಲಾಗದು.

ಮುಂದುವರೆದು, ಅಧಿಕಾರಿಗಳು ಜ್ಯೇಷ್ಠತಾ ಪಟ್ಟಿಯ ಬಗ್ಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದಲ್ಲಿ, ನ್ಯಾಯಾಲಯವು ನೀಡುವ ತೀರ್ಪನ್ನಾಧರಿಸಿ, ಷರತ್ತಿಗೊಳಪಡಿಸಿ ಅಥವಾ ಇತರೆ ಅನಿವಾರ್ಯ ಕಾರಣಗಳ ಮೇರೆಗೆ ಪುನರ್ ಪರಿಷ್ಕರಿಸಬಹುದಾದ ಷರತ್ತಿಗೊಳಪಡಿಸಿ, ಕರ್ನಾಟಕ ಸರ್ಕಾರಿ ಸೇವಾ (ಜ್ಯೇಷ್ಠತಾ) ನಿಯಮಾವಳಿಗಳು, 1957ರ ನಿಯಮ–10ರ ಅನುಸಾರ ಪರಿಗಣಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಲ್ಲಿ ದಿನಾಂಕ:01.01.2008 ರಲ್ಲಿದ್ದಂತೆ ಕಾರ್ಯ ನಿರ್ವಹಿಸುತ್ತಿರುವ ಹಿರಿಯ ಭೂಭೌತ ವಿಜ್ಞಾನಿ ವೃಂದದ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಅಧಿಕಾರಿಯ ಹೆಸರು (ಶ್ರೀಯುತರು) | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಈ ಹುದ್ದೆಗೆ ನೇಮಕವಾದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| 1. | ಎಸ್.ಎನ್. ರೀಗೆ | 21.10.1945 | 18.12.1970 | 20.09.1982 | ಪದೋನ್ನತಿ ಹೊಂದಿರುತ್ತಾರೆ. |
| 2. | ಎಸ್.ಎನ್. ಅರುಂಧಿ | 09.06.1946 | 20.07.1973 | 20.09.1982 | ಪದೋನ್ನತಿ ಹೊಂದಿರುತ್ತಾರೆ. |
| 3. | ಪಿ.ಹೆಚ್. ಹುನುಗುಂದ | 15.03.1946 | 27.07.1974 | 20.09.1982 | ನಿವೃತ್ತಿ ಹೊಂದಿರುತ್ತಾರೆ. |
| 4. | ಕೆ.ಎಸ್. ಶಾನಭಾಗ | 01.02.1943 | 20.12.1970 | 09.05.1985 | ಸ್ವಯಂ ಹೊಂದಿರುತ್ತಾರೆ. |
| 5. | ಆರ್.ಜಿ. ಭಟ್ | 03.01.1950 | 20.09.1973 | 10.05.1985 | ಪದೋನ್ನತಿ ಹೊಂದಿರುತ್ತಾರೆ |
| 6. | ಸುಭಾಷ್ ಬಿ. ತುಗಾವೆ | 03.06.1958 | 15.06.1983 | 01.10.1986 | ಇಲಾಖೆ ಬಿಟ್ಟಿರುತ್ತಾರೆ |
| 7. | ಪತ್ತಿ ಬಸವರಾಜ | 21.06.1956 | 06.06.1983 | 01.10.1986 | – |
| 8. | ಡಿ.ಹೆಚ್. ವೀರಶೇಖರಸ್ವಾಮಿ | 01.07.1955 | 13.06.1983 | 01.10.1986 | – |
| 9. | ಹೆಚ್.ವಿ. ನಾಡಗೌಡರ್ | 04.03.1956 | 08.06.1983 | 08.01.1988 | – |
| 10. | ಎ.ಎನ್. ಹೊಳೆಹೊಸೂರ್ | 15.06.1956 | 13.06.1983 | 01.10.1988 | – |
| 11. | ವಾಜೀರಾಯ ಆರ್. ಕವಳಿ | 01.06.1957 | 06.06.1983 | 01.10.1988 | – |
| 12. | ವಿ.ಕೆ. ರಾಘವೇಂದ್ರ (ಪ.ಪಂ.) | 01.06.1958 | 10.12.1984 | 04.02.1995 | – |
| 13. | ಎಸ್.ಎಸ್. ದೇಸಾಯಿ | 20.05.1953 | 01.08.1983 | 12.04.1999 | – |
| 14. | ಟಿ.ಎಂ. ಕಾನಕುಡ್ತಿ | 11.09.1954 | 14.12.1983 | 23.02.2000 | – |
| 15. | ಬಿ. ಕೊಟ್ರೇಶ್ | 01.07.1955 | 15.12.1983 | 14.06.2006 | – |
| 16. | ಎಂ.ಪಿ. ಇಟ್ನಾಳ್ | 05.07.1959 | 14.12.1984 | 13.06.2006 | – |

**ಎಂ. ವಾಸುದೇವಮೂರ್ತಿ**
ಪಿ.ಆರ್.859
ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on plastic boxes, plastic cases and plastic crates for conveyance or packing of goods.

**Ref:** Your Application Dated:12.03.2008 of Sri Mukesh Kumar and Sri Ashok Kumar, Partner's of M/s Ramnik Plastic Agency, No.37, Mamulpet, Bangalore-560 053.

In his application Dated:12.03.2008 cited above, Sri Mukesh Kumar and Sri Ashok Kumar, Partner's of M/s Ramnik Plastic Agency, No.37, Mamulpet, Bangalore-560 053 has sought clarification regarding the rate of tax applicable on plastic boxes, plastic cases and plastic crates for conveyance or packing of goods.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.353/ 07-08, Dated:29th August, 2008**

It is hereby clarified that plastic boxes, plastic cases and plastic crates for conveyance or packing of goods falling under entry sl.no.47 (from 01.04.2005 to 06.06.2005) and under entry sl.no.63 (from 07.06.2005) of Third Schedule to the Karnataka Value Added Tax Act 2003 are taxable at 4%.

**B.A. HARISH GOWDA**

PR-1083

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on plastic boxes, plastic cases and plastic crates for conveyance or packing of goods.

**Ref:** Your Application Dated:15.03.2008 of Sri Narendra Kumar, Proprietor, of M/s Nutan Plastics, No.39/C, Mamulpet, Bangalore-560 053.

In his application Dated:15.03.2008 cited above, Sri Narendra Kumar, Proprietor, of M/s Nutan Plastics, No.39/C, Mamulpet, Bangalore-560 053 has sought clarification regarding the rate of tax applicable on plastic boxes, plastic cases and plastic crates for conveyance or packing of goods.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.357/ 07-08, Dated:29th August, 2008**

It is hereby clarified that plastic boxes, plastic cases and plastic crates for conveyance or packing of goods falling under entry sl.no.47 (from 01.04.2005 to 06.06.2005) and under entry sl.no.63 (from 07.06.2005) of Third Schedule to the Karnataka Value Added Tax Act 2003 are taxable at 4%.

**B.A. HARISH GOWDA**

PR-1084

Commissioner of Commercial Taxes,
(Karnataka), Bangalore.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಕ್ರ.ಸಂ.ಡಿಆರ್‌ಎಸ್: ಸಮಾಪನೆ: ಡಿಎಲ್‌ಎಸ್:69:2006–07/1822, ದಿನಾಂಕ:22ನೇ ಫೆಬ್ರವರಿ, 2008**

**ವಿಷಯ:** ಸಮಾಪನಾ ಆದೇಶಿತ ಹಾಲು ಉತ್ಪಾದಕರ ಸಹಕಾರ ಸಂಘ ನಿ: ಹೊರಬೈಲು, ಸೊರಬ ತಾಲ್ಲೂಕು, ಇದನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಎಸ್ :ಸಮಾಪನೆ :ಡಿಎಲ್‌ಎಸ್: 1938:03–04: ದಿನಾಂಕ:13.02.2004.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಎಆರ್–24: ಸಮಾಪನೆ: ಸಿಆರ್–112: 07–08: ದಿನಾಂಕ:04.02.2008.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹೊರಬೈಲು, ಸೊರಬ ತಾಲ್ಲೂಕು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಇವರ ಕಾರ್ಯಾಲಯದಲ್ಲಿ ಎಆರ್–25: ಎಂಕೆಟಿ:18519:90–91: ದಿನಾಂಕ:31.01.1991ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ಹೊರಬೈಲು ಗ್ರಾಮಕ್ಕೆ ಸೀಮಿತವಾಗಿರುತ್ತದೆ. ಸಂಘವು ಬೈಲಾದನ್ವಯ ಕಾರ್ಯನಿರ್ವಹಿಸುವಲ್ಲಿ ವಿಫಲವಾದ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ಇವರ ಶಿಫಾರಸ್ಸಿನನ್ವಯ ಈ ಕಛೇರಿಯಿಂದ ಉಲ್ಲೇಖ(1)ರಲ್ಲಿ ಸಮಾಪನೆಗೊಳಿಸಿ ಆದೇಶ ನೀಡಲಾಗಿರುತ್ತದೆ.

ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಇವರು ಉಲ್ಲೇಖ (2)ರ ಪತ್ರದಲ್ಲಿ ಸಂಘದ ಸದಸ್ಯರು ಮತ್ತು ಗ್ರಾಮಸ್ಥರು ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿವಹಿಸಿ ಮನವಿ ನೀಡಿದ್ದು, ಮನವಿಯಲ್ಲಿ 2000–2001ರಲ್ಲಿ ಸಂಘದಲ್ಲಿ ಹಾಲು ಸಂಗ್ರಹಣೆ ಕಡಿಮೆಯಾದ ಕಾರಣ ಸ್ಥಗಿತಗೊಳಿಸಲಾಗಿತ್ತು. ಆದರೆ, ಈಗ ಸಂಘದ ವ್ಯಾಪ್ತಿಯಲ್ಲಿ ಹಾಲಿನ ಉತ್ಪಾದನೆ ಹೆಚ್ಚಾಗಿರುವುದಲ್ಲದೆ ಹಾಲಿನ ಬೆಲೆಯೂ ತೃಪ್ತಿದಾಯಕವಾಗಿರುತ್ತದೆ. ಉತ್ಪಾದನೆಯಾಗುತ್ತಿರುವ ಹಾಲು ಮಾರುಕಟ್ಟೆಯ ವ್ಯವಸ್ಥೆಯಿಲ್ಲದೆ ನಷ್ಟವಾಗುತ್ತಿರುವುದರಿಂದ ಸಂಘವನ್ನು ಪ್ರಾರಂಭಿಸಲು ಅನುಮತಿ ನೀಡಬೇಕು ಎಂಬುದಾಗಿ ಮನವಿ ಮಾಡಿಕೊಂಡಿರುವುದಾಗಿ ತಿಳಿಸುತ್ತಾ, ಸದರಿಯವರ ಕೋರಿಕೆಯನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಿ ಉತ್ತಮವಾಗಿ ನಡೆಸಿಕೊಂಡು ಹೋಗಲು ಒಂದು ಅವಕಾಶವನ್ನು ಸಂಘದ ಸದಸ್ಯರುಗಳಿಗೆ ಮತ್ತು ಗ್ರಾಮಸ್ಥರಿಗೆ ಕಲ್ಪಿಸಿಕೊಡಲು ಕೋರಿ ಶಿಫಾರಸ್ಸು ಮಾಡಿರುತ್ತಾರೆ.

ಸಂಘದ ಸದಸ್ಯರ ಮತ್ತು ಗ್ರಾಮಸ್ಥರ ಮನವಿಗಳು ಸಮಾಪನಾಧಿಕಾರಿಯವರ ನಡವಳಿಕೆ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ–ವಿಭಾಗ, ಸಾಗರ, ಇವರ ಶಿಫಾರಸ್ಸಿನನ್ವಯ ಈ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂಬ ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ–ನಿಬಂಧಕರು, ಸಿ.ಎನ್. ದೇವರಾಜ್, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:2001: ದಿನಾಂಕ:21.11.2001 ರಲ್ಲಿ ದತ್ತವಾದ ಅಧಿಕಾರದನ್ವಯ ಹಾಲು ಉತ್ಪಾದಕರ ಸಹಕಾರ ಸಂಘ ನಿ: ಹೊರಬೈಲು ಸೊರಬ ತಾಲ್ಲೂಕು, ಇದರ ಉಲ್ಲೇಖ(1)ರ ಸಮಾಪನಾ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಷರತ್ತು ಪೂರಕವಾಗಿ ಪುನಃಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು:**

1) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಾವಳಿ ಪ್ರಕಾರ ಇತ್ತೀಚಿನ ತಿದ್ದುಪಡಿ ಆಧಾರಿತವಾಗಿ ಬೈಲಾ ತಿದ್ದುಪಡಿ ಮಾಡಿಕೊಂಡು ಅನುಮೋದನೆ ಪಡೆಯತಕ್ಕದ್ದು.

2) ಸಮಾಪನಾ ಆಡಳಿತ ಪೂರ್ವದಲ್ಲಿದ್ದ ಈ ಸಂಘದ ಕಾರ್ಯವ್ಯಾಪ್ತಿಯಂತೆ ಕಾರ್ಯನಿರ್ವಹಿಸತಕ್ಕದ್ದು. ಈ ಸಂಘದ ಕಾರ್ಯವ್ಯಾಪ್ತಿಯ ಹಳ್ಳಿ: ಗ್ರಾಮಗಳು ಬೇರೆ ಸಹಕಾರ ಸಂಘಕ್ಕೆ ಸೇರ್ಪಡೆಯಾಗಿದ್ದಲ್ಲಿ, ಆ ವ್ಯವಸಾಯ ಸೇವಾ ಸಹಕಾರ ಬ್ಯಾಂಕಿನವರು ಕಾರ್ಯವ್ಯಾಪ್ತಿ ಹಳ್ಳಿ: ಗ್ರಾಮಗಳನ್ನು ಬಿಟ್ಟುಕೊಡತಕ್ಕದ್ದು. ಹಾಗೂ ಆಸ್ತಿ ಜವಾಬ್ದಾರಿಯನ್ನು ವರ್ಗಾಯಿಸತಕ್ಕದ್ದು.

3) ಸದಸ್ಯತ್ವ ಹೆಚ್ಚಿಸಿ ಶೇವಣಾತಿ ಸಂಗ್ರಹಿಸಿ ಸಂಘದ ದುಡಿಯುವ ಬಂಡವಾಳ ಹೆಚ್ಚಿಸಿಕೊಳ್ಳತಕ್ಕದ್ದು.

4) ಸಂಘದ ಸಮಾಪನಾಧಿಕಾರಿಗಳು ಎರಡು ತಿಂಗಳೊಳಗಾಗಿ ಆಡಳಿತ ಮಂಡಳಿ ರಚನೆಗಾಗಿ ಸಂಬಂಧಿಸಿದ ಅಧಿಕಾರಿಯವರಿಂದ ಚುನಾವಣಾಧಿಕಾರಿ ನೇಮಕಾತಿ ಪಡೆದು ಸರ್ವಸದಸ್ಯರ ಸಭೆ ಕರೆದು ಪ್ರಭಾರ ವಹಿಸಿಕೊಡಲು ಆದೇಶಿಸಿದೆ.

ಈ ಆದೇಶವನ್ನು ಕಛೇರಿಯ ಮೊಹರು ಹಾಗೂ ನನ್ನ ಸ್ವಸಹಿಯೊಂದಿಗೆ ಈ ದಿನ ದಿನಾಂಕ 22ನೇ ಫೆಬ್ರವರಿ 2008 ರಂದು ಹೊರಡಿಸಿದೆ.

**ಸಿ.ಎನ್. ದೇವರಾಜ್**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.226

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ**

**ನಂ.ಡಿಆರ್‌ಡಿ: ಎಲ್.ಕ್ಯೂ.ಡಿ.ಸಿಆರ್–02:07–08, ದಿನಾಂಕ:29ನೇ ಫೆಬ್ರವರಿ, 2008**

**ವಿಷಯ:** ಸಮಾಪನೆಗೊಂಡಿರುವ ನರಸಿಂಹಸ್ವಾಮಿ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಹಿರೇಕೆರೆಕಾವಲು ಚಳ್ಳಕೆರೆ ತಾಲ್ಲೂಕು ಇದರ ನೊಂದಣಿ ರದ್ಧತಿಯ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ: ಡಿಆರ್‌ಡಿ:ಎಲ್‌ಕ್ಯೂಡಿ:ಎ.ಡಿ.ಎಂ.1: ಎಫ್.ಎಂ.ಜಿ. ಎಲ್‌ಕ್ಯೂಡಿ:267:ಸಮಾಪನೆ: 92–93, ದಿನಾಂಕ:15.05.1992 ಮತ್ತು 29.09.1994.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ, ಇವರ ಪತ್ರ ಸಂಖ್ಯೆ: ಸನಿ:30:ಎಲ್‌ಕ್ಯೂಡಿ:ಸಿಆರ್:11:2007–08, ದಿನಾಂಕ:30.11.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಮೇಲ್ಕಂಡ ಸಹಕಾರ ಸಂಘವು ಕ್ರಮಸಂಖ್ಯೆ: ಸನಿ:ಎಸ್‌ಆರ್‌ಸಿ:827: 1988–89, ದಿನಾಂಕ:30.11.1965 ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಶೂನ್ಯಗೊಳಿಸಿ, ಸಂಘದ ನೊಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ಸಹ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001: ದಿನಾಂಕ:21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಹಕಾರ ಸಂಘಗಳ ಉಪ ನಿಬಂಧಕರು, ಶ್ರೀ ಆರ್. ಶಿವಪ್ರಕಾಶ್, ಆದ ನಾನು ಸಮಾಪನೆಗೊಂಡ ನರಸಿಂಹಸ್ವಾಮಿ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಹಿರೇಕೆರೆಕಾವಲ್ ಚಳ್ಳಕೆರೆ ತಾಲ್ಲೂಕು ಈ ಸಂಘದ ನೊಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು, ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 63 (ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ದಿನಾಂಕ:29.02.2008ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.329

## ಪೊಲೀಸ್ ಇಲಾಖೆ
## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ, ಬೆಂಗಳೂರು
## ಅಧಿಸೂಚನೆ
**ಸಂಖ್ಯೆ:15/ಡಿಸಿಪಿ/ಸಂ.ಪೂ/2008, ಬೆಂಗಳೂರು, ದಿನಾಂಕ:16ನೇ ಸೆಪ್ಟೆಂಬರ್, 2008**

ಬೆಂಗಳೂರು ನಗರ–ಕಬ್ಬನ್‌ಪಾರ್ಕ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಗೆ ಬರುವ ವಿಠಲ್‌ಮಲ್ಯ ರಸ್ತೆಯು ಸಿದ್ದಲಿಂಗಯ್ಯ ವೃತ್ತದಿಂದ ಲ್ಯಾವೆಲಿ ರಸ್ತೆ ಜಂಕ್ಷನ್ (ಶ್ರೀ ಎಂ.ಎಲ್.ಸುಬ್ಬರಾಜು ರಸ್ತೆ– ಕಾಫಿಡೇ ಜಂಕ್ಷನ್) ವರೆಗೂ ಉತ್ತರದಿಂದ ದಕ್ಷಿಣಕ್ಕೆ ಸಾಗಿ ಹೋಗುವ ಸಾರ್ವಜನಿಕ ರಸ್ತೆಯಾಗಿರುತ್ತದೆ. ಈ ರಸ್ತೆಯು ಬೆಂಗಳೂರು ನಗರದ ಕೇಂದ್ರ ಭಾಗದಿಂದ ಪೂರ್ವ ಮತ್ತು ಆಗ್ನೇಯದ ಕಡೆ ಸಾಗಿಹೋಗುವ ಸಂಚಾರದ ಸಂಪರ್ಕ ರಸ್ತೆಯಾಗಿದ್ದು ರಸ್ತೆಯ ಅಗಲ ಸರಾಸರಿ 38 ಅಡಿಯಷ್ಟಿದ್ದು ದ್ವಿಮುಖ ಸಂಚಾರದ ವ್ಯವಸ್ಥೆ ಇರುತ್ತದೆ. ಈ ರಸ್ತೆಯಲ್ಲಿ ವಾಣಿಜ್ಯ ಸಂಕೀರ್ಣಗಳು, ವಾಸದ ಮನೆಗಳು, ಬಹು ಮಹಡಿ ಕಟ್ಟಡಗಳು ಮತ್ತು ಪೆಟ್ರೋಲ್ ಬಂಕ್ ಸಹ ಇದ್ದು ವಾಹನ ಸಂಚಾರವು ಯಾವುದೇ ವೇಳೆಯಲ್ಲೂ ಅತ್ಯಧಿಕವಾಗಿದ್ದು ಸಂಚಾರ ದಟ್ಟಣೆ ಮತ್ತು ಒತ್ತಡದಿಂದ ಕೂಡಿರುತ್ತದೆ. ಈ ಹಿಂದೆ ಸಂಚಾರ ಕಡಿಮೆ ಇದ್ದು ವಿರಳವಾಗಿದ್ದಾಗ ವಿಠಲ್‌ಮಲ್ಯ ರಸ್ತೆಯ ಪಶ್ಚಿಮ ಪಾರ್ಶ್ವದ ಬದಿಯಲ್ಲಿ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಲಾಗಿತ್ತು. ಆದರೆ ಇತ್ತೀಚಿಗೆ ಸಂಚಾರ ದಟ್ಟಣೆ ಮತ್ತು ಒತ್ತಡ ಹೆಚ್ಚಾಗಿರುವ ಪ್ರಯುಕ್ತ ಈ ರಸ್ತೆಯಲ್ಲಿ ಒದಗಿಸಲಾಗಿರುವ ವಾಹನ ನಿಲುಗಡೆ ಸೌಲಭ್ಯವು ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗಿ ಸ್ಥಗಿತಗೊಳ್ಳುತ್ತಿರುವುದಲ್ಲದೆ ಹೆಚ್ಚಿನ ಅಪಘಾತಗಳಿಗೂ ಕಾರಣವಾಗಿರುತ್ತೆ. ಆದ್ದರಿಂದ ಸಾರ್ವಜನಿಕ ಸುಗಮ ಸಂಚಾರದ ಹಿತದೃಷ್ಟಿಯಿಂದ ಹಾಗೂ ಅಪಘಾತಗಳನ್ನು ನಿಯಂತ್ರಿಸಲು ವಿಠಲ್‌ಮಲ್ಯ ರಸ್ತೆಯ ಎರಡೂ ಬದಿಗಳಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಂಕರ ಬಿದರಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಿಠಲ್‌ಮಲ್ಯ ರಸ್ತೆಯಲ್ಲಿ ವಾಹನ ನಿಲುಗಡೆ ನಿಷೇಧ ಸಂಬಂಧ ಕೆಳಕಂಡಂತೆ ಆದೇಶಿಸಿರುತ್ತೇನೆ.

"ವಿಠಲ್‌ಮಲ್ಯ ರಸ್ತೆಯಲ್ಲಿ ಸಿದ್ದಲಿಂಗಯ್ಯ ವೃತ್ತದಿಂದ ಲ್ಯಾವೆಲಿ ರಸ್ತೆ (ಶ್ರೀ ಎಂ.ಎಲ್. ಸುಬ್ಬರಾಜು ರಸ್ತೆ–ಕಾಫಿ ಡೇ ಜಂಕ್ಷನ್) ವರೆಗೂ ರಸ್ತೆಯ ಎರಡೂ ಬದಿಗಳಲ್ಲಿ ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ನಿಷೇಧಿಸಿದೆ."

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:16.09.2008 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:16.09.2008 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಶಂಕರ ಬಿದರಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.1088

**IN THE COURT OF 8TH ADDITIONAL CHIEF METROPOLITAN MAGISTRATE, BANGALORE CITY**

It is here by notified for the information of the public that the under mentioned Two Wheelers and English letter scrap metals is with the custody of Vyalikaval Police Station, Bangalore City. as unclaimed shall be ownership within the six months from that of the publications of this notification.

| Sl. No. | Cr.No. & C miss No. | P.F.No. | Vehicle No. Eng No. & Chasis No. | Vehicle Name |
|---|---|---|---|---|
| 1. | C.miss No.-102/98 | 66/98 | English Letters (scrap metal) Weight arround-12 kg's | - |
| 2. | Cr.No.03/00 | 03/00 | No.KA-11-P-1827, EN No.336592, CH No.336592 | YAMAHA RX-100 |
| 3. | Cr.No-03/00 | 04/00 | No. CTR-1617, EN No.14117358, CH.No.14117358 | YAMAHA RX-100 |

| Sl. No. | Cr.No. & C miss No. | P.F.No. | Vehicle No. Eng No. & Chasis No. | Vehicle Name |
|---|---|---|---|---|
| 4. | Cmiss No.236/00 | 84/00 | No.KA-02-L-9875, EN No.5034048636, CH No.L503F063633 | T.V.S. CHAMP |
| 5. | Cmiss No.237/00 | 85/00 | No.CTS-1105, EN No.327353 CH No.0326766 | T.V.S.-50 |
| 6. | Cmiss No.327/01 | 75/01 | No.KA-03-V-9257, EN No.9804MO54470, CH No.9804F00 7367 | SUZUKI MAX-100 |
| 7. | Cmiss No.431/02 | 67/02 | No.KA-04-H-7284 EN No.CB08336, CH No.10449 | HERO PUCH |
| 8. | Cmiss No.176/04 | 15/04 | No.KA-02-I-3896, EN No.H10E614616, CH No.ATDF6655 | HERO HONDA |
| 9. | Cmiss No.1192/07 | 70/07 | No.KA-40-1416 EN No.AEMBKD30715, CH No.24FBK026142 | BAJAJ AUTO RIKSHAW |
| 10. | Cmiss No.592/08 | 58/08 | No.CAY-2654, EN No.NIL CH No.NIL | T.V.S.CHAMP |
| 11. | Cmiss No.595/08 | 59/08 | No.KA-05-EB-2232, EN No.790701412111, CH No.1701F362887 | SUZUKI SHOWGN |
| 12. | Cmiss No.596/08 | 60/08 | No.KA-02-EM-4968, EN No.DUMDLC35363, CH No.DUFDLC45631 | BAJAJ CT-100 |
| 13. | Cmiss No.606/08 | 61/08 | No.KA-03-H-5086, EN No.E30CG040128, CH No.NIL | KAWASAKI BAJAJ |
| 14. | Cmiss No.607/08 | 62/08 | No.KA-03-EP-1183, EN No.0D1H41202643, CH No.MD62 1BD1241H90983 | T.V.S. XL SUPER |
| 15. | Cmiss No.608/08 | 63/08 | No.KA-04-L-6565, EN No.NIECK548821, CH No.NIFCK559263 | KINETIC HONDA |
| 16. | Cmiss No.609/08 | 64/08 | No.KA-02-L-7945 EN No.NIL, CH No.NIL | T.V.S.XL-50 |

Magistrate
Court of 8th Additional Chief
Metropolitan Magistrate,
Bangalore City.

PR-1092

**ಪೊಲೀಸ್ ಇಲಾಖೆ**

**ಪೊಲೀಸ್ ಇನ್ಸ್‌ಪೆಕ್ಟರ್, ಜೆ.ಬಿ.ನಗರ ಪೊಲೀಸ್ ಠಾಣೆ, ಬೆಂಗಳೂರು–75**

**ವಿಷಯ:** ವಾರಸುದಾರರಿಲ್ಲದ ದ್ವಿಚಕ್ರ ಮತ್ತು ತ್ರಿಚಕ್ರ ವಾಹನಗಳ ವಿಲೇವಾರಿ ಬಗ್ಗೆ ಬಹಿರಂಗ ಹರಾಜು ಪಡಿಸುವ ಬಗ್ಗೆ.

**ಉಲ್ಲೇಖ:** ನಿಯಮ 457(2) ದರ ದಂಡಪ್ರಕ್ರಿಯಾ ಸಂಹಿತೆ, ದಿನಾಂಕ:20.08.2008.

ಈ ಮೇಲ್ಕಂಡ ವಿಷಯದ ಬಗ್ಗೆ ತಮ್ಮಲ್ಲಿ ನಿವೇದಿಸಿಕೊಳ್ಳುವುದೇನೆಂದರೆ, ಜೀವನಭೀಮಾನಗರ ಪೊಲೀಸ್ ಠಾಣಾ ಸರಹದ್ದಿನಲ್ಲಿ 2003–2005–2007ನೇ ಸಾಲಿನಲ್ಲಿ ವಾರಸುದಾರರಿಲ್ಲದ ದ್ವಿಚಕ್ರ ಮತ್ತು ತ್ರಿಚಕ್ರವಾಹನಗಳನ್ನು ಅಮಾನತ್ತು ಪಡಿಸಿಕೊಂಡಿದ್ದು ಇದುವರೆವಿಗೂ ವಾರಸುದಾರರು ಪತ್ತೆಯಾಗದ ಕಾರಣ ಸದರಿ ವಾಹನಗಳನ್ನು ಬಹಿರಂಗ ಹರಾಜುಪಡಿಸಲು ಅನುಮತಿ ಕೋರಿ ಈಗಾಗಲೇ ಮಾನ್ಯ 1ನೇ ಸಂಚಾರಿ ನ್ಯಾಯಾಲಯಕ್ಕೆ ಮನವಿಪತ್ರಗಳನ್ನು ನಿವೇದಿಸಿಕೊಂಡಿದ್ದು ಮಾನ್ಯ ನ್ಯಾಯಾಧೀಶರು ಸದರಿ ವಾಹನಗಳ ಬಹಿರಂಗ ಹರಾಜು ಬಗ್ಗೆ ರಾಜ್ಯಪತ್ರದಲ್ಲಿ ಪ್ರಕಟಿಸಲು ಆದೇಶಿಸಿದ್ದು ವಾಹನಗಳ ವಿವರಗಳು ಈ ಕೆಳಕಂಡಂತೆ ಇರುತ್ತೆ.

| ಕ್ರ.ಸಂ. | ದಿನಾಂಕ | ಪಿಮಿಸ್ ಸಂಖ್ಯೆ | ಪಿ.ಎಫ್. ಸಂಖ್ಯೆ | ವಾಹನದ ವಿವರ |
|---|---|---|---|---|
| 1. | 26.09.03 | 99/03 | 54/03 | ಕೈನೆಟಿಕ್ ಹೋಂಡಾ ಕೆಎ–03–ವಿ–7892 |
| 2. | 26.09.03 | 99/03 | 54/03 | ಕೈನೆಟಿಕ್ ಹೋಂಡಾ ಕೆಎ–03–ಜೆ–2673 |
| 3. | 24.09.03 | 97/03 | 52/03 | ಕೈನೆಟಿಕ್ ಹೋಂಡಾ ಟಿ.ಎಸ್.ಇ–5481 |
| 4. | 03.04.05 | 90/03 | 34/05 | ಟಿ.ವಿ.ಎಸ್.50 ಸಿ.ಎ.ಜಡ್–5535 |
| 5. | 03.04.05 | 90/03 | 34/05 | ಟಿ.ವಿ.ಎಸ್.50 ಸಿಕೆಪಿ–3453 |
| 6. | 04.04.05 | 91/05 | 35/05 | ಟಿ.ವಿ.ಎಸ್. ಮ್ಯಾಕ್ಸ್100 ಟಿಎನ್–23–ಎಂ–0398 |
| 7. | 04.04.05 | 91/05 | 35/05 | ಯಮಹಾ ಕಪ್ಪು ಬಣ್ಣ ನಂ.ಗೊತ್ತಿಲ್ಲ |
| 8. | 06.04.05 | 94/05 | 36/05 | ಒಂದು ಹೀರೋಹೋಂಡಾ ಸಿಡಿ–100 ನಂ.ಕೆಎ–03–ಕೆ–1125 |
| 9. | 06.04.05 | 94/05 | 36/05 | ಟಿ.ವಿ.ಎಸ್. ಆಸ್ಟ್ರಾ ನಂ.ಗೊತ್ತಿಲ್ಲ |
| 10. | 07.04.05 | 96/05 | 36/05 | ಯಜಡಿ 250 ಕ್ಲಾಸಿಕ್ ಸಿಬಿಕೆ–2411 |
| 11. | 07.04.05 | 96/05 | 36/05 | ಹೀರೋ ಪುಚ್ ಕೆಎ–03–ಎಸ್–3104 |
| 12. | 07.04.05 | 96/05 | 36/05 | ಟಿ.ವಿ.ಎಸ್. ಸೂಪರ್ ಚಾಂಪ್ ಕೆಎ–03–ಕ್ಯೂ–5452 |
| 13. | 10.11.07 | 381/07 | 108/07 | ಆಟೋರಿಕ್ಷಾ ನಂ.ಕೆಎ–04–3956 |
| 14. | 10.11.07 | 381/07 | 108/07 | ಆಟೋರಿಕ್ಷಾ ನಂ.ಸಿಎಎಂ–2717 |
| 15. | 11.11.07 | 383/07 | 110/07 | ಕೈನೆಟಿಕ್ ಹೋಂಡಾ ಕೆಎ–01–ಹೆಚ್.7947 |
| 16. | 11.11.07 | 383/07 | 110/07 | ಕೈನೆಟಿಕ್ ಹೋಂಡಾ ಕೆಎ–01–ಆರ್–4560 |

ಇದರೊಂದಿಗೆ ಮಾನ್ಯ 1ನೇ ಸಂಚಾರಿ ನ್ಯಾಯಾಧೀಶರ ಆದೇಶದ ಪ್ರತಿಗಳನ್ನು ಲಗತ್ತಿಸಿ ನಿವೇದಿಸಿಕೊಂಡಿದೆ.

ದಿನಾಂಕ:20.09.2008

ಸ್ಥಳ: ಬೆಂಗಳೂರು.

ಪೊಲೀಸ್ ಇನ್ಸ್‌ಪೆಕ್ಟರ್,
ಜೀವನ ಭೀಮಾನಗರ, ಪೊಲೀಸ್ ಠಾಣೆ,
ಬೆಂಗಳೂರು–560 075.

ಪಿ.ಆರ್.1093

## ENERGY DEPARTMENT

## NOTIFICATION

**No.EN 69 PSR 2008, Bangalore, Dated:15th September, 2008**

Power from the newly commissioned Bellary Thermal Power Station-Stage I (BTPS-Stage I) of KPCL, among ESCOMs in the State of Karnataka is allocated as under:

| Name of the ESCOM | BTPS-Stage I |
|---|---|
| BESCOM | 45.9492% |
| MESCOM | 8.7320 % |
| HESCOM | 20.3598 % |
| GESCOM | 15.2678 % |
| CESC, Mysore | 9.6912 % |

The allocation of share among ESCOMs in respect of Chakra Diversion Scheme is revised as under w.e.f. 10.06.2005 onwards, on par with the allocation of Sharavathy Generating Station as Chakra Diversion Scheme is related to Sharavathly Generating Station.

| Name of the ESCOM | Chakra Diversion Scheme-I |
|---|---|
| BESCOM | 35.67% |
| MESCOM | 7.19% |
| HESCOM | 25.67% |
| GESCOM | 19.25% |
| CESC, Mysore | 12.20% |

Consequently, ESCOMs shall revise the bills in respect of Chakra Diversion Scheme with effect from 10.06.2005, and all other terms in the Notifications bearing No.EN 45 PSR 2006 Dated:22.04.2006, Corrigendum No.EN 131 PSR 2003 Dated:12.06.2006 and Notification No.EN 131 PSR 2003 Dated:28.06.2007 remain unaltered.

By Order and in the Name of the Governor of Karnataka,

**S.J. SAMPATH KUMAR**

PR-1091

Under Secretary to Government,

Energy Department.

**ಕಂದಾಯ ಇಲಾಖೆ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಕಂಇ 405 ಬಿಎಂಎಂ 2008, ಬೆಂಗಳೂರು, ದಿನಾಂಕ:11ನೇ ಸೆಪ್ಟೆಂಬರ್, 2008**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 496 ಬಿಎಂಎಂ 2005 ದಿನಾಂಕ:24.08.2006 ರಂದು ಪ್ರಕಟಿಸಿದ ರಾಜ್ಯ ಮಟ್ಟದ ಶಿರಸ್ತೇದಾರರ/ ಉಪತಹಸೀಲ್ದಾರರ ಅಂತಿಮ ಜೇಷ್ಠತಾ ಪಟ್ಟಿಯ 3ನೇ ಅಂಕಣದಲ್ಲಿ ಜೇಷ್ಠತಾ ಕ್ರಮ ಸಂಖ್ಯೆ:4543 ರಲ್ಲಿ ಶ್ರೀಮತಿ ಎನ್. ಉಷಾದೇವಿ, ಇವರ ಹೆಸರಿನ ಮುಂದೆ ಸ್ಟೆನೋ, PR ಎಂದು ನಮೂದಾಗಿರುತ್ತದೆ.

ನೌಕರರ ಸೇವಾ ದಾಖಲೆಗಳನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 496 ಬಿಎಂಎಂ 2005 ದಿನಾಂಕ:24.08.2006ರಲ್ಲಿ ಪ್ರಕಟಗೊಂಡಿರುವ ಜೇಷ್ಟತಾ ಪಟ್ಟಿಯಲ್ಲಿ ಕ್ರಮಸಂಖ್ಯೆ 4543 ರಲ್ಲಿರುವ ಶ್ರೀಮತಿ ಎನ್. ಉಷಾದೇವಿ, ಸ್ಟೆನೋ PR ಎಂದು ಜೇಷ್ಟತಾ ಪಟ್ಟಿಯ 2 ಮತ್ತು 3ನೇ ಅಂಕಣದಲ್ಲಿ ನಮೂದಾಗಿರುವುದನ್ನು, ಇನ್ನು ಮುಂದೆ ಈ ಕೆಳಕಂಡಂತೆ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ನೌಕರರ ಹೆಸರು | ಡಿ.ಆರ್/ ಪಿ.ಆರ್ | ವಿಭಾಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 4543 | ಎ.ಎಸ್. ಉಷಾದೇವಿ | ಡಿ.ಆರ್. | ಬೆಂಗಳೂರು | 08.04.52 | 28.07.77 | 26.09.88 | ಶಿರಸ್ತೇದಾರರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರಯ್ಯ**

ಪಿ.ಆರ್.1089

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–1)

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ–2005**

**ಭಾಗ–1**

ಕಾರ್ಯನಿರ್ವಾಹಕ ಇಂಜಿನೀಯರ್ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಗುಣನಿಯಂತ್ರಣ ವಿಭಾಗ ಗುಲ್ಬರ್ಗಾ ಕಛೇರಿಯ ಮಾಹಿತಿ ಹಕ್ಕು ನಿಯಮ–2005ರ ಅಡಿಯಲ್ಲಿ ಈ ಕಛೇರಿಯಿಂದ ನೀವು ದಾಖಲಾತಿಗಳನ್ನು ಪಡೆಯಬಹುದು.

1) ದಾಖಲಾತಿಗಳನ್ನು 15 ದಿನಗಳಲ್ಲಿ ನೀಡಲಾಗುವುದು. (ರಜಾ ದಿನಗಳನ್ನು ಹೊರತುಪಡಿಸಿ)

2) ಈ ಕಛೇರಿಯಲ್ಲಿ ಮಾಹಿತಿ ದಾಖಲಾತಿಗಳನ್ನು ನೀಡುವ ಅಧಿಕಾರಿಗಳು.

| ಕ್ರಮ ಸಂಖ್ಯೆ | ಅಧಿಕಾರಿಗಳು (ಶ್ರೀಯುತರು) | ಪದನಾಮ | ನಿರ್ವಹಿಸುತ್ತಿರುವ ಉಸ್ತುವಾರಿ |
|---|---|---|---|
| 1. | ಸೂರ್ಯಕಾಂತ ಕಾರಭಾರಿ | ಸಹಾಯಕ ಇಂಜಿನೀಯರು | ತಾಂತ್ರಿಕ ಶಾಖೆಯ ಉಸ್ತುವಾರಿ |
| 2. | ಸೈಯದ ತಖಿವುಲ್ಲಾ ಹುಸೇನಿ | ಪ್ರಥಮ ದರ್ಜೆ ಸಹಾಯಕರು | ಆಡಳಿತ ಶಾಖೆಯ ಮೇಲ್ವಿಚಾರಣೆ |

**ಸಕ್ಷಮ ಪ್ರಾಧಿಕಾರಿ:**

ಎಸ್.ಜಿ. ಮಠ ಕಾರ್ಯನಿರ್ವಾಹಕ ಇಂಜಿನೀಯರರು.

**ಮೇಲ್ಮನವಿ ಪ್ರಾಧಿಕಾರಿ:**

ಶ್ರೀ ಎಂ. ನಾರಾಯಣ ಅಧೀಕ್ಷಕ ಇಂಜಿನೀಯರರು, ಲೋ.ಬಂ.ಮತ್ತು ಒ.ಜ.ಸಾ.ಇ. ಗುಣನಿಯಂತ್ರಣ ವೃತ್ತ, ಧಾರವಾಡ.

**ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದ ಪಕ್ಷದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.**

ಮುಖ್ಯ ಇಂಜಿನೀಯರರು, ಲೋ.ಬಂ.ಮತ್ತು ಒ.ಜ.ಸಾ.ಇ. ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ.

ಈ ಕಾಯ್ದೆಯ ಅಧಿನಿಯಮವು ಮತ್ತು ನಿಯಮಗಳ ಪಟ್ಟಿಗಳು ಸರ್ಕಾರಿ ಮುದ್ರಣಾಲಯ ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತವೆ.

ಕಾರ್ಯನಿರ್ವಾಹಕ ಇಂಜಿನೀಯರರು,
ಲೋ.ಬಂ.ಮತ್ತು ಒ.ಜ.ಸಾ.ಇಲಾಖೆ,
ಗುಣನಿಯಂತ್ರಣ ವಿಭಾಗ, ಗುಲ್ಬರ್ಗಾ.

## ಭಾಗ–2

## ರಚನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಗುಣನಿಯಂತ್ರಣ ವಿಭಾಗ ಗುಲ್ಬರ್ಗಾ ಇದು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ ಗುಲ್ಬರ್ಗಾ ಆವರಣದಲ್ಲಿ ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. ಈ ವಿಭಾಗವು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಗುಲ್ಬರ್ಗಾ ಮತ್ತು ಬಳ್ಳಾರಿ ವೃತ್ತದ ಕಾರ್ಯವ್ಯಾಪ್ತಿಯನ್ನು ಹೊಂದಿದೆ. ಈ ವಿಭಾಗದ ಪ್ರಭಾರವನ್ನು ಎಸ್.ಜಿ. ಮಠ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಹೊಂದಿರುತ್ತಾರೆ. ಈ ಕಾರ್ಯಾಲಯದಲ್ಲಿ ಮೂರು ಸಹಾಯಕ ಇಂಜಿನೀಯರ್ ಹಾಗೂ ಒಬ್ಬ ಕಿರಿಯ ಇಂಜಿನೀಯರ್ ಹಾಗೂ ಮೂರು ಸಮೂಹ "ಸಿ" ಮತ್ತು ಎರಡು "ಡಿ" ವರ್ಗದ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ.

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಗುಣನಿಯಂತ್ರಣ ವಿಭಾಗದ ಪ್ರಕಾರ್ಯಗಳು**

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಗುಣನಿಯಂತ್ರಣ ವಿಭಾಗದ ನಿಯಂತ್ರಣದಲ್ಲಿ ಈ ಕೆಳಗೆ ತಿಳಿಸಿರುವ ಗುಣನಿಯಂತ್ರಣ ಉಪ–ವಿಭಾಗ ಕಾರ್ಯಾಲಯಗಳು ಇರುತ್ತವೆ.

1) ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಗುಣನಿಯಂತ್ರಣ ಉಪ–ವಿಭಾಗ ಗುಲ್ಬರ್ಗಾ.

2) ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಗುಣನಿಯಂತ್ರಣ ಉಪ–ವಿಭಾಗ, ಬಳ್ಳಾರಿ.

ಈ ಎರಡು ಕಾರ್ಯಾಲಯಗಳ ಮೂಲಕ ಕಾರ್ಯಕಲಾಪ ನಿರ್ವಹಿಸುತ್ತಿದ್ದು ಪ್ರಮುಖವಾಗಿ ಈ ಕೆಳಕಂಡ ವಿಷಯಗಳು ಈ ವಿಭಾಗದ ಕಾರ್ಯವ್ಯಾಪ್ತಿಯಲ್ಲಿ ಬರುತ್ತವೆ.

ಎ) ರಸ್ತೆ ಸೇತುವೆ ಹಾಗೂ ಕಟ್ಟಡ ಕಾಮಗಾರಿಗಳ ಗುಣಪರೀಕ್ಷೆ ವರದಿಗಳು.

ಬಿ) ರಾಜ್ಯ ಹೆದ್ದಾರಿ ವರದಿಗಳು, ಜಿಲ್ಲಾ ಮುಖ್ಯ ರಸ್ತೆ, ರಸ್ತೆ ಸ್ಥಿತಿ ಗತಿ ಸಮೀಕ್ಷೆ.

ಸಿ) ಅಧಿಕಾರಿಗಳು ಹಾಗೂ ಸಿಬ್ಬಂದಿಯವರ ಸೇವೆ ಕುರಿತು ಪತ್ರ ವ್ಯವಹಾರ ಹಾಗೂ ಸೇವಾ ಪುಸ್ತಕಗಳ ನಿರ್ವಹಣೆ.

ಡಿ) ಅಧಿಕಾರಿಗಳು ಹಾಗೂ ಸಿಬ್ಬಂದಿಯವರ ವೇತನ ಭತ್ಯೆಗಳ ಬಟವಾಡೆ.

ಇ) ವೇತನ ಪ್ರಯಾಣಭತ್ಯೆ, ಹಬ್ಬದ ಮುಂಗಡ, ಸಾಮಾನ್ಯ, ಭವಿಷ್ಯ ನಿಧಿ ಮಂಜೂರಾತಿ ಹಾಗೂ ಬಟವಾಡೆ.

ಎಫ್) ಅಧಿಕಾರಿಗಳ ಹಾಗೂ ಸಿಬ್ಬಂದಿಯವರ ಚರಾಸ್ತಿ ಮತ್ತು ಸ್ಥಿರಾಸ್ತಿ ಖರೀದಿಗಳಿಗೆ ಮಂಜೂರಾತಿ ಹಾಗೂ ಪತ್ರ ವ್ಯವಹಾರ.

ಜಿ) ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿಗಳು ಹಾಗೂ ಕಾರ್ಯನಿರ್ವಹಣಾ ವರದಿಗಳ ನಿರ್ವಹಣೆ.

ಎಚ್) ವಿಧಾನ ಸಭೆ ಮತ್ತು ವಿಧಾನ ಪರಿಷತ್ತ್ ಪ್ರಶ್ನೆಗಳ ನಿರ್ವಹಣೆ.

ಐ) ನ್ಯಾಯಾಲಯ ಹಾಗೂ ಇಲಾಖೆ ವಿಚಾರಣೆ ಪ್ರಕರಣಗಳ ನಿರ್ವಹಣೆ.

ಜೆ) ನಿವೃತ್ತಿ ವೇತನ ಪ್ರಕರಣಗಳು.

ಕೆ) ಸಿಬ್ಬಂದಿ ಕೆಲಸದ ಅನುದಾನದ ಅಂದಾಜು ಹಾಗೂ ಎಫ್ ಆರ್ ಐ ತಯಾರಿಸುವುದು.

ಎಲ್) ಅನುದಾನದ ಬಿಡುಗಡೆಗಾಗಿ ಪತ್ರವ್ಯವಹಾರ.

ಎಂ) ಲೆಕ್ಕ ಪತ್ರ ಶಾಖೆಯ ಪತ್ರ ವ್ಯವಹಾರ.

ಕಾರ್ಯನಿರ್ವಾಹಕ ಇಂಜಿನೀಯರರು,
ಪಿ.ಆರ್.1087 ಲೋ.ಬಂ.ಮತ್ತು ಒ.ಜ.ಸಾ.ಇಲಾಖೆ,
ಗುಣನಿಯಂತ್ರಣ ವಿಭಾಗ, ಗುಲ್ಬರ್ಗಾ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

### ನಂ.ಡಿಆರ್‌ಡಿ:ಎಲ್.ಕ್ಯೂ.ಡಿ: ಸಿಆರ್–02: 07–08, ದಿನಾಂಕ:29ನೇ ಫೆಬ್ರವರಿ, 2008

**ವಿಷಯ:** ಸಮಾಪನೆಗೊಂಡಿರುವ ನಗರಂಗೆರೆ ಗೃಹ ಕೈಗಾರಿಕೆ ಸಹಕಾರ ಸಂಘ ನಿ., ಚಳ್ಳಕೆರೆ ತಾಲ್ಲೂಕು ಇದರ ನೊಂದಣಿ ರದ್ಧತಿಯ ಬಗ್ಗೆ.

**ಉಲ್ಲೇಖ:**1) ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ ಡಿಆರ್‌ಡಿ:ಎಲ್‌ಕ್ಯೂಡಿ: ಎಲ್‌ಕ್ಯೂಡಿ: ಸಿಆರ್:37: 2001–02, ದಿನಾಂಕ:26.02.2002.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರ ಸಂ:ಸನಿ:30 ಎಲ್‌ಕ್ಯೂಡಿ:ಸಿಆರ್:11:2007–08, ದಿನಾಂಕ:30.11.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ ಆರ್.ಎಸ್.ಆರ್.:15920 1988–89 ದಿನಾಂಕ:06.08.1988 ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಶೂನ್ಯಗೊಳಿಸಿ, ಸಂಘದ ನೊಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ಸಹ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001: ದಿನಾಂಕ:21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಹಕಾರ ಸಂಘಗಳ ಉಪನಿಬಂಧಕರು, ಶ್ರೀ ಆರ್. ಶಿವಪ್ರಕಾಶ್, ಆದ ನಾನು ಸಮಾಪನೆಗೊಂಡ ನಗರಂಗೆರೆ ಗೃಹ ಕೈಗಾರಿಕೆ ಸಹಕಾರ ಸಂಘ ನಿ., ಚಳ್ಳಕೆರೆ ತಾಲ್ಲೂಕು ಈ ಸಂಘದ ನೊಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು, ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 63(ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ದಿನಾಂಕ:_2008ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.330

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

### ನಂ.ಡಿಆರ್‌ಡಿ:ಎಲ್.ಕ್ಯೂ.ಡಿ: ಸಿಆರ್–01: 07–08, ದಿನಾಂಕ:29ನೇ ಫೆಬ್ರವರಿ, 2008

**ವಿಷಯ:** ಸಮಾಪನೆಗೊಂಡಿರುವ ಜಗಳೂರೇಶ್ವರ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಹೀರೇಕೆರೆಕಾವಲ್ ಚಳ್ಳಕೆರೆ ತಾಲ್ಲೂಕು ಇದರ ನೊಂದಣಿ ರದ್ಧತಿಯ ಬಗ್ಗೆ.

**ಉಲ್ಲೇಖ:**1) ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:264: ಸಮಾಪನೆ 92–93, ದಿನಾಂಕ:15.05.1992 ಮತ್ತು 13.09.1994.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರ ಸಂ:ಸನಿ:30 ಎಲ್‌ಕ್ಯೂಡಿ:ಸಿಆರ್:11:2007–08, ದಿನಾಂಕ:30.11.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಮೇಲ್ಕಂಡ ಸಹಕಾರ ಸಂಘವು ಕ್ರಮಸಂಖ್ಯೆ ಎಆರ್‌ಸಿ:1826 1965-66 ದಿನಾಂಕ:30.01.1965ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಶೂನ್ಯಗೊಳಿಸಿ, ಸಂಘದ ನೊಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರು ಸಹ ಈ ಸಂಘದ ನೊಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎ:2001: ದಿನಾಂಕ:21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಹಕಾರ ಸಂಘಗಳ ಉಪನಿಬಂಧಕರು, ಶ್ರೀ ಆರ್. ಶಿವಪ್ರಕಾಶ್, ಆದ ನಾನು ಸಮಾಪನೆಗೊಂಡ ಜಗಳೂರೇಶ್ವರ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಹಿರೇಕೆರೆಕಾವಲ್, ಚಳ್ಳಕೆರೆ ತಾಲ್ಲೂಕು ಈ ಸಂಘದ ನೊಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು, ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 63(ಎಸ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ದಿನಾಂಕ:_2008ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.331

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ನ್ಯಾಯಾಲಯದ ನಡವಳಿಕೆಗಳು**

**ವಿಷಯ:** ತುಮಕೂರು ಜಿಲ್ಲೆ, ಶಿರಾ ಟೌನ್‌ನಲ್ಲಿರುವ ಸಲಾಮತ್ ಪತ್ತಿನ ಸಹಕಾರ ಸಂಘ ನಿ., ಶಿರಾ ಇದರಲ್ಲಿ ನಡೆದಿರುವ ಪಿಗ್ಮಿ ಹಣದುರುಪಯೋಗದ ಬಗ್ಗೆ ಶ್ರೀ ಮೊಹಮದ್ ಅಕ್ಬರ್ ಬಿನ್ ಅಬ್ದುಲ್ ಜಬ್ಬಾರ್ ಪಿಗ್ಮಿ ಏಜೆಂಟ್ ಇವರ ಕಾನೂನು ವಾರಸುದಾರರಾದ ತಂದೆ ಮತ್ತು ತಾಯಿ ಹೆಸರಿನಲ್ಲಿ ಜಂಟಿಯಾಗಿರುವ ಸ್ಥಿರಾಸ್ತಿಗಳನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ಮಾಡುವ ಬಗ್ಗೆ.

**ಉಲ್ಲೇಖ:**1) ಅಧ್ಯಕ್ಷರು ಸಲಾಮತ್ ಪತ್ತಿನ ಸಹಕಾರ ಸಂಘ ನಿ., ಶಿರಾ ಇವರ ಪ್ರಸ್ತಾವನೆ ಪತ್ರದ ದಿನಾಂಕ:14.02.2008.

2) ದಿನಾಂಕ:23.01.2008ರಂದು ಈ ನ್ಯಾಯಾಲಯದಲ್ಲಿ ದಾಖಲಾಗಿರುವ ಅಧಿಭಾರ ಅರ್ಜಿ ಸಂಖ್ಯೆ:12:2007-08.

**ಪ್ರಸ್ತಾವನೆ:**

ಶ್ರೀ ಮೊಹಮದ್ ಅಕ್ಬರ್‌ರವರು ಪಿಗ್ಮಿ ಏಜೆಂಟ್‌ರಾಗಿ ದಿನಾಂಕ:01.05.1999 ರಿಂದ ಸಲಾಮತ್ ಪತ್ರಿನ ಸಹಕಾರ ಸಂಘ ನಿ., ಶಿರಾ ಇದರಲ್ಲಿ ಕೆಲಸ ನಿರ್ವಹಿಸಿರುತ್ತಾರೆ. ಇನ್ನು ಮುಂದೆ ಅರ್ಜಿದಾರ ಸಂಘವೆಂದು ಕರೆಯಲ್ಪಡುತ್ತದೆ. ಸದರಿ ಪಿಗ್ಮಿ ಸಂಗ್ರಹಣಕಾರರು ರೂ.13,96,159/- ಸದರಿ ಅರ್ಜಿದಾರ ಸಂಘದ ಹಣವನ್ನು ದುರುಪಯೋಗ ಮಾಡಿರುತ್ತಾರೆ. ಸಂಘವು ಚೇತರಿಸಿಕೊಳ್ಳಬೇಕಾದರೆ ಈ ಹಣದ ದುರುಪಯೋಗದ ಜೊತೆಗೆ ರೂ.6,11,060/- ಜುಮ್ಲಾ ರೂ.20,07,219/- ಬಡ್ಡಿ ಆಕರಣೆ ಮಾಡಿ ವಸೂಲು ಮಾಡಲು ಆಡಿಟರ್ ರವರು ಅಸೆಸ್ ಮಾಡಿರುತ್ತಾರೆ. ಈ ವಿವರ ಅರ್ಜಿದಾರ ಸಂಘದ 2003-04 ರಿಂದ 2006-07ನೇ ಸಾಲುಗಳ ಲೆಕ್ಕ ವಿವರವನ್ನು ಆಡಿಟ್ ಮಾಡಿರುವ ಲೆಕ್ಕ ಪರಿಶೋಧನಾ ವರದಿಯಿಂದ ಕಂಡುಬಂದಿದೆ.

ಈ ರೀತಿಯ ಹಣದ ವಸೂಲಾತಿಗೆ ಸಂಘದ ಅಧ್ಯಕ್ಷರು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಅಡಿ ಅರ್ಜಿ ಮತ್ತು ಕಲಂ 69ರ ಅಡಿಯಲ್ಲಿ ಅದಿಭಾರ ಅರ್ಜಿಯನ್ನು ದಿನಾಂಕ:14.02.2008 ಮತ್ತು 23.01.2008 ರಂದು ಕ್ರಮವಾಗಿ ಅರ್ಜಿ ಮತ್ತು ದಾವೆಯನ್ನು ಸಲ್ಲಿಸಿರುತ್ತಾರೆ. ಈ ಅದಿಭಾರ ಅರ್ಜಿಯನ್ನು ದಿನಾಂಕ:24.01.2008ರಂದು ಕಡತದ ಮೇಲೆ ತೆಗೆದುಕೊಂಡು ದಿನಾಂಕ:22.03.2008 ರಿಂದ ವಿಚಾರಣೆ ಪ್ರಾರಂಭಿಸಲು ಆರೋಪ ಸಹಿತದ ನೋಟೀಸ್‌ನ್ನು ಸಿದ್ಧಪಡಿಸಲಾಗುತ್ತಿದೆ. ಅರ್ಜಿದಾರ ಸಂಘವು ಉಲ್ಲೇಖ (1) ಪತ್ರದಲ್ಲಿ ಹಾಗೂ ದಾವೆಯಲ್ಲಿ ಮನವಿ ಮಾಡಿ ಒಂದನೇ ಪ್ರತಿವಾದಿ ದುರುಪಯೋಗಪಡಿಸಿದ ಹಣ ರೂ.13,96,159/– ಮತ್ತು ಬಡ್ಡಿ ರೂ.6,11,060/–ಗಳ ವಸೂಲಿ ಕುರಿತು ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾಯ್ದಿರಿಸಿ ಸದರಿ ದಾವೆಯ ಒಂದನೇ ಪ್ರತಿವಾದಿಯವರ ಹಕ್ಕುಬದ್ಧ ಕಾನೂನು ವಾರಸುದಾರರಾದ ತಂದೆ ಮತ್ತು ತಾಯಿಯವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಫ್ತಿಯ ಆದೇಶ ನೀಡಬೇಕಾಗಿ ಕೋರಿರುತ್ತಾರೆ ಆದುದರಿಂದ ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿರುವ ಅದಿಭಾರ ಅರ್ಜಿ ಸಂಖ್ಯೆ: 12/2007–08 ಗಳಲ್ಲಿನ ಅಂತಿಮ ತೀರ್ಪು ಕಾಯ್ದಿರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಈ ನ್ಯಾಯಾಲಯದಲ್ಲಿರುವ ದಾವೆ ತೀರ್ಪು ಪೂರ್ವ ಈ ಕೆಳಕಂಡ ಷೆಡ್ಯೂಲ್ ಆಸ್ತಿಯನ್ನು ಜಫ್ತಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಜಫ್ತಿ ಆದೇಶ**

**ನಂ.ಸ.ಸಂ.ಸ.ನಿ/33: ಎಬಿಎನ್:ಡಿಡಿಎಸ್:117/2007–08, ದಿನಾಂಕ:3ನೇ ಮಾರ್ಚ್, 2008**

ಕರ್ನಾಟಕ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿ.ಎಂ.ಡಬ್ಲ್ಯೂ: 69: ಸಿಎಲ್‌ಎಂ:2001, ದಿನಾಂಕ:21.11.2001 ರಲ್ಲಿ ಪ್ರತ್ಯಾಯೋಜಿಸಿರುವ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ನೇ ಪ್ರಕಾರ ಶ್ರೀ ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಮೊಹಮದ್ ಅಕ್ಬರ್ ಪಿಗ್ಮಿ ಏಜೆಂಟ್ ಇವರ ತಂದೆ ಅಬ್ದುಲ್ ಜಬ್ಬಾರ್ ಮತ್ತು ತಾಯಿ ಮಕ್ಬೂಲ್ ಉನ್ನೀಸಾ ಹೆಸರಿನಲ್ಲಿ ಜಂಟಿಯಾಗಿರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ಇರುವ ದಾವೆಯ ಅಂತಿಮ ತೀರ್ಪಿಗೆ ಒಳಪಟ್ಟು ಈ ಆದೇಶ ಪೂರ್ವ ಜಫ್ತಿ ಆದೇಶ ಹೊರಡಿಸಿರುತ್ತೇನೆ.

ಶ್ರೀ ಮೊಹಮದ್ ಅಕ್ಬರ್ ಪಿಗ್ಮಿ ಏಜೆಂಟ್ ಇವರ ತಂದೆ ಶ್ರೀ ಅಬ್ದುಲ್ ಜಬ್ಬಾರ್ ಮತ್ತು ತಾಯಿ ಮಕ್ಬೂಲ್ ಉನ್ನೀಸಾ ಇವರ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತುಗಳಿಗೆ ತತ್ಸಮಾನವಾದ ನಗದು ಭದ್ರತೆ ನೀಡುವವರೆವಿಗೆ ವಿಲೇವಾರಿ ಮಾಡುವುದೇ ಆಗಲಿ, ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದೇ ಆಗಲಿ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ ಮಾರಾಟ ಮಾಡಿದರೂ ಈ ಸ್ವತ್ತು ಸಾರ್ವಜನಿಕರು ಖರೀದಿಸಿದಲ್ಲಿ, ಪರಭಾರೆ ಮಾಡಿಕೊಂಡಲ್ಲಿ ಅಥವಾ ಇನ್ನಾವುದೇ ವಿದದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಾಧುವಾಗುವುದಿಲ್ಲ (ಸಕ್ರಮವಾಗುವುದಿಲ್ಲ) ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರು ಮತ್ತು ಕಾನೂನು ವಾರಸುದಾರರು ಈ ಜಫ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಫ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ಈ ನ್ಯಾಯಾಲಯವು ಸರಿ ಎಂದು ಭಾವಿಸುವ ತಕ್ಕಷ್ಟು ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಮಧುಗಿರಿ ಶಾಖೆ, ಮಧುಗಿರಿ ಈ ಬ್ಯಾಂಕಿನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ:08.04.2008ರಂದು ಅಥವಾ ಅದಕ್ಕಿಂತ ಮುಂಚಿತವಾಗಿ ಈ ನ್ಯಾಯಾಲಯಕ್ಕೆ ಹಾಜರುಪಡಿಸುವುದರ ಮೂಲಕ ಈ ಜಫ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ.

ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಒಂದನೇ ಎದುರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಫ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರದ ಸಹಿ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:03.03.2008ರಂದು ನೀಡಿದ್ದೇನೆ.

**ಹೆಚ್.ಡಿ. ಶಿವಣ್ಣ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಷೆಡ್ಯೂಲ್ ಸ್ವತ್ತು**

| ಕ್ರ. ಸಂ. | ಖಾತೆದಾರರ/ ಹಕ್ಕುದಾರರ ಹೆಸರು ಮತ್ತು ವಿಳಾಸ | ಅಸೆಸ್‌ಮೆಂಟ್ ನಂ. | ಸ್ಥಿರಾಸ್ತಿ ತರಹೆ | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| 1. | ಅಬ್ದುಲ್ ಜಬ್ಬಾರ್ ಮತ್ತು ಮಕ್ಬೂಲ್ ಉನ್ನೀಸಾ ಪೇಷುಮಾಂಮೊಹಲ್ಲಾ, ಶಿರಾಟೌನ್. | 19/14/4831 | ಕರೆ ಹೆಂಚಿನ ಹಳೇಮನೆ | 34x20 ಅಡಿಗಳು | ಪೂರ್ವಕ್ಕೆ: ಜಾಮಿಯಾ ಮಸೀದಿ ರಸ್ತೆ<br>ಪಶ್ಚಿಮಕ್ಕೆ: ಕನ್ಸರ್‌ವೆನ್ಸಿ<br>ಉತ್ತರಕ್ಕೆ: ಡಿ. ಮುನೀರ್ ಸಾಬ್‌ರವರ ಮನೆ.<br>ದಕ್ಷಿಣಕ್ಕೆ: ಲೇ: ಗಾರೆ ಲತೀಫ್‌ಸಾಬ್ ಮನೆ. |

ದಿನಾಂಕ:03.03.2008

ಸ್ಥಳ: ಮಧುಗಿರಿ

**ಹೆಚ್.ಡಿ. ಶಿವಣ್ಣ**

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಮಧುಗಿರಿ ಉಪವಿಭಾಗ, ಮಧುಗಿರಿ.

ಇವರಿಗೆ

1) ಶ್ರೀ ಮೊಹಮದ್ ಅಕ್ಬರ್ ಬಿನ್ ಅಬ್ದುಲ್ ಜಬ್ಬಾರ್
ಪಿಗ್ಮಿ ಏಜೆಂಟ್, ಪೇಷುಮಾಂ ಮೊಹಲ್ಲಾ, ಶಿರಾ, ತುಮಕೂರು ಜಿಲ್ಲೆ.

2) ಅಬ್ದುಲ್ ಜಬ್ಬಾರ್,
ಪೇಷುಮಾಂ ಮೊಹಲ್ಲಾ, ಶಿರಾ, ತುಮಕೂರು ಜಿಲ್ಲೆ.

3) ಮಕ್ಬೂಲ್ ಉನ್ನೀಸಾ
ಪೇಷುಮಾಂ ಮೊಹಲ್ಲಾ, ಶಿರಾ, ತುಮಕೂರು ಜಿಲ್ಲೆ.

**ಹೆಚ್.ಡಿ. ಶಿವಣ್ಣ**

ಪಿ.ಆರ್.318

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಮಧುಗಿರಿ ಉಪವಿಭಾಗ, ಮಧುಗಿರಿ.

## ಕಾನೂನು ಮಾಪನಶಾಸ್ತ್ರ ಇಲಾಖೆ

## ಕಾನೂನು ಮಾಪನಶಾಸ್ತ್ರ ನಿಯಂತ್ರಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಪಿ.ಬಿ.ನಂ.175, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ: ಕಾಮಾಇ.ಕ್ಷೇ.ವ್ಯಾ.ಸಿ.ಆರ್–13:2008–09, ದಿನಾಂಕ:17ನೇ ಜುಲೈ, 2008**

**ವಿಷಯ:** ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರು, ಸಂಚಾರಿದಳ–2 ಹಾಗೂ ನಿರೀಕ್ಷಕರು, ಸಂಚಾರಿದಳ–2, ಬೆಂಗಳೂರು ಇವರಿಗೆ ಕ್ಷೇತ್ರವ್ಯಾಪ್ತಿ ದೃಢೀಕರಣ ಪತ್ರ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶದ ಸಂಖ್ಯೆ: ಆನಾಸ 134 ಆಇಸೇ 97 (ಭಾಗ–2), ದಿನಾಂಕ:23.11.1999.

2) ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಸಿಎಲ್‌ಎಂ.ಎಸಿಟಿಜು.ಸಿಆರ್–67/ 90–91, ದಿನಾಂಕ: 27.08.1990.

3) ಸರ್ಕಾರದ ಆದೇಶದ ಸಂಖ್ಯೆ: ಆನಾಸ 170 ಆಇಸೇ 2007, ಬೆಂಗಳೂರು, ದಿನಾಂಕ:23.08.2007.

ಸರ್ಕಾರದ ಉಲ್ಲೇಖಿತ 1 ಮತ್ತು 3ರ ಆದೇಶದಲ್ಲಿ ಕೆಲವು ಹೊಸ ಜಿಲ್ಲೆಗಳನ್ನು ಸೃಜಿಸಲಾಗಿದ್ದು ಈ ಆದೇಶದನ್ವಯ ಉಲ್ಲೇಖ–2ರಲ್ಲಿ ಕಾನೂನು ಮಾಪನಶಾಸ್ತ್ರ ಸಹಾಯಕ ನಿಯಂತ್ರಕರು, ಸಂಚಾರಿದಳ–2 ಹಾಗೂ ನಿರೀಕ್ಷಕರು, ಸಂಚಾರಿದಳ–2 ಇವರುಗಳಿಗೆ ನೀಡಲಾದ ಕ್ಷೇತ್ರವ್ಯಾಪ್ತಿಯ ಜೊತೆಗೆ ಉಡುಪಿ, ದಾವಣಗೆರೆ, ಚಾಮರಾಜನಗರ, ಕೋಲಾರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳು ಒಳಗೊಂಡಿದ್ದು ಅವುಗಳನ್ನು ಹೊಸದಾಗಿ ಸೃಜಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ಕ್ಷೇತ್ರವ್ಯಾಪ್ತಿ ನೀಡಿ ಆದೇಶಿಸಿದೆ.

**ಡಿ. ಬಸವರಾಜು**

ಪಿ.ಆರ್.854

ಕಾನೂನು ಮಾಪನಶಾಸ್ತ್ರ ನಿಯಂತ್ರಕರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ, ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಅಮಲ್ಜಾರಿ ಅರ್ಜಿ ಸಂಖ್ಯೆ:69:2002–03**

**ಬಿಡ್‌ದಾರರು: ಎಸ್.ಜಿ.ಮಂಜುನಾಥ್ ಬಿನ್ ಆರ್.ಹೆಚ್. ಗುಜ್ಜಾರಪ್ಪ, ಕೋಟೆ, ಶಿರಾ**

| **ಡಿಕ್ರಿ ಹೋಲ್ಡರ್:** | | **ತೀರ್ಪುಋಣಿ:** |
|---|---|---|
| ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ರತ್ನಮ್ಮ ಕೋಂ ಪಿ.ರಾಜಣ್ಣ, ಜೋಗಣ್ಣನವರ ಸೇತುವೆ, ಗುರುಸಿದ್ಧಪ್ಪನವರ ಮನೆ ಮುಖ್ಯ ರಸ್ತೆ, ಶಿರಾ ಟೌನ್, ಶಿರಾ. |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ತೀರ್ಪುಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.53160–00 ದಾವಾ ಶುಲ್ಕ ರೂ.280–00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ:69:2002–03 ಮೊಬಲಗು ರೂ.69595–00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ದಿನಾಂಕ:23.05.2007ಕ್ಕೆ ರೂ.115200–00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:24.05.2007 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಎಸ್.ಜಿ. ಮಂಜುನಾಥ ಬಿನ್ ಆರ್.ಹೆಚ್. ಗುಜ್ಜಾರಪ್ಪ, ಕೋಟೆ, ಶಿರಾ ಇವರಿಗೆ ನಿವೇಶನವನ್ನು ರೂ.26000–00 (ರೂಪಾಯಿಗಳು ಇಪ್ಪತ್ತಾರು ಸಾವಿರ ಮಾತ್ರ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸ.ಸಂ.ಸನಿ.33:ಎಬಿಎನ್:ಎಸ್.ಸಿ.56:2007–08, ದಿನಾಂಕ:31ನೇ ಮೇ, 2008**

ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960 ನಿಯಮ 38(6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದಕ್ಕೆ ತೀರ್ಪುಋಣಿಗಳಾದ ರತ್ನಮ್ಮ ಕೋಂ ಪಿ. ರಾಜಣ್ಣ, ಜೋಗಣ್ಣನವರ ಸೇತುವೆ, ಗುರುಸಿದ್ದಪ್ಪನವರ ಮನೆ, ಮುಖ್ಯರಸ್ತೆ, ಶಿರಾ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:24.05.2007ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಎಸ್.ಜಿ. ಮಂಜುನಾಥ ಬಿನ್ ಆರ್.ಹೆಚ್. ಗುಜ್ಜಾರಪ್ಪ, ಕೋಟೆ, ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇವೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಶ್ರೀ ಎಸ್.ಜಿ. ಮಂಜುನಾಥ, ಬಿನ್ ಆರ್.ಹೆಚ್. ಗುಜ್ಜಾರಪ್ಪ ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.26000–00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀಮತಿ ರತ್ನಮ್ಮ ಕೋಂ ಪಿ. ರಾಜಣ್ಣ ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಶಿರಾ ಟೌನ್ ಪುರಸಭೆ ಖಾನೇಷು, ಮಾರಿ ನಂ.2084/ 2048ನೇ (ಚಾಲ್ತಿ) ಅಳತೆ ಪೂರ್ವ–ಪಶ್ಚಿಮ 17 ಅಡಿ, ಉತ್ತರ–ದಕ್ಷಿಣ 21 ಅಡಿ ನಿವೇಶನ, ಚೆಕ್ಕುಬಂದಿ ಪೂರ್ವಕ್ಕೆ ರಸ್ತೆ, ಪಶ್ಚಿಮಕ್ಕೆ ಇದೇ ನಂಬರಿನ ಮಂಜುನಾಥರವರ ನಿವೇಶನ, ಉತ್ತರಕ್ಕೆ ಹೆಚ್. ರಂಗನಾಥಪ್ಪನವರ ಹಿಸ್ಸೆ, ದಕ್ಷಿಣಕ್ಕೆ ಗಲ್ಲಿ, ಈ ಮಧ್ಯೆ ಇರುವ ನಿವೇಶನ.

